ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ಬಾಲಮಂದಿರಗಳಲ್ಲಿನ ಮಕ್ಕಳ ಸ್ಥಿತಿಗತಿ ಕುರಿತು

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

312 (468) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮಕ್ಕಳ ನ್ಯಾಯ (ಪೋಷಣೆ ಮತ್ತು ರಕ್ಷಣೆ) ಕಾಯ್ದೆ 2015 (ತಿದ್ದುಪಡಿ) ಅನ್ವಯ ಪೋಷಣೆ ಮತ್ತು ರಕ್ಷಣೆಗೆ ಅವಶ್ಯಕವಿರುವ ಮಕ್ಕಳ ಅನುಕೂಲಕ್ಕಾಗಿ ಬಾಲಮಂದಿರಗಳನ್ನು ತೆರೆದಿದ್ದು, ಅದರಲ್ಲಿ ಮೂಲಭೂತ ಸೌಲಭ್ಯಗಳಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಕಳೆದ ಮೂರು ವರ್ಷಗಳ ಅವಧಿಯಲ್ಲಿ ಬಾಲಮಂದಿರಗಳಿಂದ ಓಡಿ ಹೋದ ಮಕ್ಕಳ ಸಂಖ್ಯೆ ಎಷ್ಟು ; (ಜಿಲ್ಲಾವಾರು ಮಾಹಿತಿ ನೀಡುವುದು)

(ಇ) ಇಲ್ಲಿಯವರೆಗೆ ಎಷ್ಟು ಮಕ್ಕಳನ್ನು ಬಾಲಮಂದಿರಕ್ಕೆ ಮರಳಿ ಕರೆತರಲಾಗಿದೆ ; ಈ ಮಕ್ಕಳ ಹಕ್ಕುಗಳನ್ನು ಕಾಪಾಡಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ ;

(ಈ) ಬಾಲಮಂದಿರಗಳಿಂದ ಮಕ್ಕಳು ಓಡಿ ಹೋಗಲು ಕಾರಣಗಳೇನು; (ವಿವರ ನಿಡುವುದು)

(ಉ) ಸರ್ಕಾರಿ ಬಾಲಮಂದಿರಗಳಲ್ಲಿ ಸೂಕ್ತ ತರಬೇತಿ ಹೊಂದಿದ ಎಲ್ಲಾ ಹಂತದ ಸಿಬ್ಬಂದಿಗಳನ್ನು ನೇಮಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ ? (ವಿವರ ನೀಡುವುದು)